*ನವಸಾಕ್ಷರತೆ ಸಾಹಿತ್ಯ ಮಾಲೆ*

# ಪಾಪಣ್ಣ ಪರಾರಿಯಾದ ಕಥೆ

ರಾಮಕೃಷ್ಣಪ್ಪ

ಚಿತ್ರಗಳು

ಶ್ರೀಕಾಂತ ಜಿ. ಪೋದ್ದಾರ



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

ಕರ್ನಾಟಕ ಲೋಕ ಶಿಕ್ಷಣ ನಿರ್ದೇಶನಾಲಯ ಹಾಗೂ ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ ಇವರ ಜಂಟಿ ಆಶ್ರಯದಲ್ಲಿ ನಡೆದ ಕಮ್ಮಟದಲ್ಲಿ ಈ ಪುಸ್ತಕವನ್ನು ಸಿದ್ಧಪಡಿಸಲಾಗಿದೆ.

ISBN 81-237-2089-0

ಮೊದಲ ಮುದ್ರಣ: 1997 (ಶಕ 1918)

Papanna Parariyada Kathe (*Kannada Original*)
ರೂ. 6.50
ನಿರ್ದೇಶಕರು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ
ಎ-5, ಗ್ರೀನ್‌ಪಾರ್ಕ್, ಹೊಸದೆಹಲಿ -110016
ಇವರಿಂದ ಪ್ರಕಟಿತ.

# ಪೂಜಾರಿಯಾದ ಪಾಪಣ್ಣ

ಬೇಸಿಗೆ ಮುಗಿದಿದೆ. ಮುಂಗಾರು ಮಳೆ ಇನ್ನೂ ಬಂದಿಲ್ಲ. ಕೆರೆ-ಕಟ್ಟೆಗಳು ಒಣಗಿವೆ. ಬಾವಿಗಳು ಬತ್ತಿವೆ. ಜನರಿಗೆ ಕುಡಿಯಲು ನೀರಿಲ್ಲ. ನೀರಿಗಾಗಿ ಅವರು ಪರದಾಡುತ್ತಿದ್ದಾರೆ. ದೂರ ದೂರದಿಂದ ನೀರು ತರುತ್ತಿದ್ದಾರೆ. ದನಗಳಿಗೂ ಕುಡಿಯಲು ನೀರಿಲ್ಲ.

ಮಟ ಮಟ ಮಧ್ಯಾಹ್ನ. ತಲೆ ಸುಡುವ ಬಿಸಿಲು. ಉರಿವ ಬಿಸಿಲಿಗೆ ನೆಲವೂ ಸುಡುತ್ತಿವೆ. ಇಂಥ ಬಿಸಿಲಿನಲ್ಲೇ ಪಾಪಣ್ಣ ಆ ಊರಿಗೆ ಬಂದ. ಅವನಿಗೆ ನಡೆದೂ ನಡೆದೂ ಆಯಾಸ ಆಗಿತ್ತು. ದಣಿವಾರಿಸಿಕೊಳ್ಳಲು ಆತ ಊರ ಮುಂದಿನ ಅರಳೀಕಟ್ಟೆಯ ಮೇಲೆ ಕುಳಿತ. ಮೆಲ್ಲಗೆ ನಿದ್ದೆ ಹತ್ತಿತು.

ಹೊತ್ತು ಮುಳುಗಿ ಸಂಜೆಯಾಯಿತು.

ಊರವರು ಸಂಜೆಗೆ ಸಭೆ ಸೇರಬೇಕೆಂದು ಗೌಡ ಕರೆ ಕಳಿಸಿದ್ದ. ಜನರು ಅರಳೀಕಟ್ಟೆಯ ಮುಂದೆ ಸೇರತೊಡಗಿದರು. ಜನರ ಗದ್ದಲದಿಂದ ಪಾಪಣ್ಣ ಎಚ್ಚರಗೊಂಡ. ಎದ್ದು ಪಕ್ಕಕ್ಕೆ ಸರಿದು ಕುಳಿತುಕೊಂಡ. ಆ ವೇಳೆಗೆ ಊರ ಹಿರಿಯರು ಬಂದರು. ಎಲ್ಲರೂ ಪಾಪಣ್ಣನನ್ನು, "ಯಾವ ಊರು? ಏನು ಬಂದದ್ದು?" ಎಂದು ವಿಚಾರಿಸುವವರೇ. ಊರ ಗೌಡನೂ ಬಂದು ವಿಚಾರಿಸಿದ.

ತಾನು ದೂರದ ಊರಿನವನೆಂದೂ, ಗ್ರಹಚಾರ ನೆಟ್ಟಗಿಲ್ಲದೆ ಮನೆ-ಮಠ ಎಲ್ಲವನ್ನೂ ಕಳೆದುಕೊಂಡು ದೇಶಾಂತರ ಬಂದಿರುವು

ದಾಗಿಯೂ ಹೇಳಿದ ಪಾಪಣ್ಣ. ಅವನು ಕಾಸೀಪಂಚೆ ಉಟ್ಟು ಬಿಳೀ ಜುಬ್ಬ ತೊಟ್ಟಿದ್ದನು. ಹೆಗಲ ಮೇಲೆ ಕೆಂಪು ಟವೆಲ್ ಹಾಕಿದ್ದನು. ಹಣೆಯಲ್ಲಿ ವಿಭೂತಿ ಪಟ್ಟೆಯ ನಡುವೆ ಕುಂಕುಮ ಇಟ್ಟಿದ್ದನು. ಅವನ ಮಾತು, ವೇಷ-ಭೂಷಣ ನೋಡಿ ಆಚಾರ-ವಿಚಾರ ಬಲ್ಲ ವ್ಯಕ್ತಿ ಎಂದು ಗೌಡನಿಗೆ ಗೌರವ ಮೂಡಿತು. ಊರಿನ ಜನರಿಗೂ ಗೌರವ ಭಾವನೆ ಬಂದಿತು. ಆ ಸಭೆಯಲ್ಲಿ ಇದ್ದು ಸಲಹೆ ಕೊಡಬೇಕೆಂದು ಗೌಡ ಪಾಪಣ್ಣನನ್ನು ಕೇಳಿಕೊಂಡ. ತನ್ನ ಪಕ್ಕದಲ್ಲೇ ಕುಳಿತುಕೊಳ್ಳುವಂತೆಯೂ ಹೇಳಿದ.

ಊರಿನ ಹಿರಿಯರು ಕಟ್ಟೆಯ ಮೇಲೆ ಕುಳಿತರು. ಉಳಿದವರು ಕಟ್ಟೆಯ ಕೆಳಗೆ ಕುಳಿತುಕೊಂಡರು. ಊರಿನ ವಿದ್ಯಾವಂತ ಯುವಕ ಮಧು ದೂರದಲ್ಲಿ ಒಂದೆಡೆ ಕುಳಿತುಕೊಂಡ.

"ಅಕ್ಕಪಕ್ಕದ ಊರುಗಳಲ್ಲಿ ದನಗಳು ಸಾಯುತ್ತಿವೆಯಂತೆ, ಇದಕ್ಕೆ ಏನು ಮಾಡಬೇಕೆಂದು ಕೇಳಲು ಕರೆ ಕಳಿಸಿದ್ದೆ" ಎಂದು ಗೌಡ ಮಾತು ಶುರು ಮಾಡಿದ.

"ನಿನ್ನೆ ಭೂವಳ್ಳಿಗೆ ಹೋಗಿದ್ದೆ. ದಿನಕ್ಕೆ ಎರಡು-ಮೂರು ರಾಸುಗಳು ಸಾಯುತ್ತಿವೆ. ಬೀರಪ್ಪನ ಬೀಜದ ಹೋರಿ ನಿನ್ನೆ ಸತ್ತು ಹೋಯಿತು. ನಾನೇ ನೋಡಿದೆ" ಎಂದು ದಳ್ಳಾಳಿ ದೊಡ್ಡಪ್ಪ ಜನರು ಹೆದರುವಂತೆ ವಿವರಿಸಿದ.

"ಹಾಗಾದರೆ ಇದು ಮಾರಮ್ಮನ ಕಾಟ" ಎಂದು ಭೀಮಣ್ಣ ಎಲ್ಲಾ ಬಲ್ಲವನಂತೆ ಹೇಳಿದ.

"ಈವತ್ತು ಪರ ಊರಿನಲ್ಲಿರುವ ಮಾರಮ್ಮ ನಾಳೆ ನಮ್ಮೂರಿಗೂ ಬಂದಾಳು. ಅವಳು ಬರುವ ಮುಂಚೇನೇ ಏನಾದರೂ ಶಾಂತಿ ಮಾಡಿದರೆ ಒಳ್ಳೇದು" ಎಂಬುದು ಗುಡಿಕಾರ ಗುಡ್ಡಪ್ಪನ ಸಲಹೆ.

ಎಲ್ಲರಿಗೂ ಗುಡ್ಡಪ್ಪನ ಸಲಹೆ ಸರಿ ಎನಿಸಿತು.

"ಹಾಗಾದರೆ ಏನು ಶಾಂತಿ ಮಾಡಬೇಕು, ನೀವೇ ಹೇಳಿ" ಎಂದು ಗೌಡ ಜನರನ್ನು ಕೇಳಿದ.

"ಮಾರಮ್ಮ ಅಂದ ಮೇಲೆ ರಕ್ತ ಬಲಿ ಆಗಲೇ ಬೇಕು" ಎಂದು ಭೀಮಣ್ಣ ತಕ್ಷಣ ಉತ್ತರಿಸಿದ.

"ಬಲಿ ಕೊಡಬೇಕು ಅಂತ ಭೀಮಣ್ಣ ಹೇಳಿದ, ನೀವೇನು ಹೇಳುತ್ತೀರಾ?" ಎಂದು ಪುನಃ ಜನರನ್ನು ಕೇಳಿದ ಗೌಡ. ಊರಿನ ಜನ ತಮ್ಮ ತಮ್ಮಲ್ಲೇ ಮಾತಾಡಿಕೊಳ್ಳ ತೊಡಗಿದರು.

"ಗೌಡರೆ, ಮಾರಮ್ಮನಿಗೂ ದನಗಳು ಸಾಯುವುದಕ್ಕೂ ಏನೂ ಸಂಬಂಧ ಇಲ್ಲ. ಸೋಂಕು ತಗುಲಿ ದನಗಳಿಗೆ ರೋಗ ಬಂದಿರಬಹುದು. ರೋಗ ನಮ್ಮೂರಿಗೆ ಬರುವ ಮೊದಲು ಡಾಕ್ಟರನ್ನು ಕರೆಸಿ" ಎಂದು ಹತ್ತಿರ ಬಂದು ಮಧು ಹೇಳಿದ.

ಮಧುವಿನ ಮಾತನ್ನು ಕೇಳಿ ಜನ ಒಬ್ಬರನ್ನೊಬ್ಬರು ನೋಡಿಕೊಂಡರು. ಗುಸುಗುಸು ಮಾತಾಡಲು ಶುರು ಮಾಡಿದರು.

"ಹುಲ್ಲು ತಿನ್ನುತ್ತವೆ, ನೀರು ಕುಡಿಯುತ್ತವೆ, ಇದ್ದಕ್ಕಿದ್ದ ಹಾಗೆ ದನಗಳು ಸಾಯುತ್ತವೆ ಎಂದರೆ, ಇದು ಮೈಯಲ್ಲಿ ಹುಟ್ಟಿರೋ ಕಾಯಿಲೆ ಅಲ್ಲ" ಎಂದು ದೊಡ್ಡಪ್ಪ ಭೀಮಣ್ಣನ ಪರವಾಗಿ ಮಾತಾಡಿದ.

"ಮಧು ನೀನು ಈಗಿನ ಕಾಲದ ಹುಡುಗ, ಇದೆಲ್ಲಾ ನಿನಗೆ ತಿಳಿಯೊಲ್ಲ" ಎಂದು ಗೌಡ ಅವನನ್ನು ಸುಮ್ಮನಿರಲು ಹೇಳಿದ.

"ಹಾಗಲ್ಲ ಗೌಡರೆ, ಡಾಕ್ಟರನ್ನು ಕರೆಸಿ ಚುಚ್ಚುಮದ್ದು ಕೊಡಿಸಿದರ ನಮಗೇನೂ ಖರ್ಚು ಬರೋಲ್ಲ. ಮಾರಮ್ಮನ ಹಬ್ಬ ಮಾಡೋಕೆ ಹೋದರೆ ಬಡಬಗ್ಗರಿಗೆ ಕಷ್ಟ ಆಗುತ್ತೆ" ಎಂದು ಮಧು ಬಡವರ ಪರವಾಗಿ ವಾದಿಸಿದ.

ಕೆಲವರಿಗೆ ಮಧು ಹೇಳಿದ್ದು ಸರಿ ಎನಿಸಿತು. ಅವರೆಲ್ಲಾ ಡಾಕ್ಟರನ್ನು ಕರೆಸಿ ಎಂದರು. ಮತ್ತೆ ಕೆಲವರು ಬಲಿ ಕೊಡಬೇಕು ಎಂದರು.

ಯಾವುದೂ ತೀರ್ಮಾನ ಆಗಲಿಲ್ಲ.

ಪಾಪಣ್ಣ ಎಲ್ಲರ ಮುಖವನ್ನೂ ನೋಡುತ್ತಿದ್ದ. ಅವರ ಭಾವನೆಗಳನ್ನು ಗಮನಿಸುತ್ತಿದ್ದ. ಬಹಳ ಜನರು ಬಲಿ ಕೊಡುವುದರ ಪರವಾಗಿದ್ದರು. ಆಗ ಪಾಪಣ್ಣ ಮೆಲ್ಲನೆ ಬಾಯಿ ತೆರೆದು, "ನೀವೆಲ್ಲಾ ಒಪ್ಪಿದರೆ ನಾನೊಂದು ಸಲಹೆ ನೀಡುವೆನು" ಎಂದ. ಅದಕ್ಕೆ ಎಲ್ಲರೂ ಒಪ್ಪಿಗೆ ಕೊಟ್ಟರು.

"ಮಾರಮ್ಮನ ಹೆಸರು ಹೇಳುತ್ತಿದ್ದೀರಿ. ಶಾಂತಿ ಮಾಡದಿದ್ದರೆ ಮಾರಮ್ಮ ನಿಮ್ಮೂರನ್ನೇ ಸುಟ್ಟು ಬಿಟ್ಟಾಳು. ನಿಮಗೆ ಬಲಿ ಕೊಡಲು ಸಾಧ್ಯವಾಗದೇ ಇದ್ದರೆ ನೂರೊಂದು ಎಡೆ ಸೇವೆ ಮಾಡಿ ಗ್ರಾಮ ಕಟ್ಟಳೆ ಮಾಡಿಸಿದರೆ ಸಾಕು. ಮಾರಮ್ಮ ಈ ಕಡೆ ತಲೆ ಕೂಡ ಹಾಕಲ್ಲ" ಎಂದು ಸಲಹೆ ನೀಡಿದ ಪಾಪಣ್ಣ.

ಪಾಪಣ್ಣನ ಸಲಹೆ ಎಲ್ಲರಿಗೂ ಒಪ್ಪಿಗೆಯಾಯಿತು. ಡಾಕ್ಟರ್ ಕರೆಸಿ ಎಂದು ಹೇಳಿದ್ದ ಮಧುವೂ ಸುಮ್ಮನಾಗಬೇಕಾಯಿತು. ಮಾರನೆಯ ದಿನ ಮಂಗಳವಾರದ ಸಂಜೆ ನೂರೊಂದು ಎಡೆ ಸೇವೆ ಮತ್ತು ಗ್ರಾಮ ಕಟ್ಟಳೆ ಮಾಡುವುದೆಂದು ತೀರ್ಮಾನ ಆಯಿತು. ಪಾಪಣ್ಣ ಏನೇನು ಸಿದ್ಧತೆ ಮಾಡಿಕೊಳ್ಳಬೇಕೆಂದು ತಿಳಿಸಿದನು. ಗೌಡ ಜನರಿಗೆ ಜವಾಬ್ದಾರಿ ಹಂಚಿದನು.

ಮಾರನೆಯ ದಿನ ಬೆಳಗಿನಿಂದಲೇ ಜನರು ಸಡಗರದಿಂದ ಓಡಾಡ ತೊಡಗಿದರು. ಹೆಂಗಸರು ಅಂಗಳ ಸಾರಿಸಿ ರಂಗೋಲಿ ಬಿಡಿಸಿದರು. ಕುಲವಾಡಿಗಳು ಊರ ಎಲ್ಲೆಡೆ ಗುಡಿಸಿದರು. ಊರ ಬಾಗಿಲಿಗೆ ತೋರಣ ಕಟ್ಟಿದರು. ಮಧ್ಯಾಹ್ನದ ವೇಳೆಗೆ ವಾದ್ಯದವರು ಬಂದರು. ಹೊತ್ತು ಮುಳುಗುವ ವೇಳೆಗೆ ಜನರು ಗುಡಿಯ ಮುಂದೆ ಸೇರಿದರು. ದೇವರಿಗೆ ಪೂಜೆ ಮಾಡಲು ಖಾಯಂ ಪೂಜಾರಿ ಇರಲಿಲ್ಲ. ಗೌಡ ಪಾಪಣ್ಣನನ್ನೇ ಪೂಜೆ ಮಾಡಲು ಕೇಳಿಕೊಂಡನು.

ಪಾಪಣ್ಣ ದೇವರ ಎದುರಿಗೆ ನೂರಾ ಒಂದು ಎಡೆಗಳನ್ನು ಇಡಿಸಿದನು. ದೇವರಿಗೆ ಮಂಗಳಾರತಿ ಮಾಡಿದನು. ಭೂತರಾಯನಿಗೆ ಮಣೇವು ಹಾಕಲು ಹೇಳಿದನು. ಪಾಪಣ್ಣನ ಸೂಚನೆಯಂತೆ ಗ್ರಾಮದೇವತೆಯನ್ನು ಹೊರಡಿಸಲಾಯಿತು.

ವಾದ್ಯಗಳು ಜೋರಾದವು. ಗ್ರಾಮ ದೇವತೆಯನ್ನು ಊರ ಹೊರಕ್ಕೆ ತರಲಾಯಿತು. ಪಾಪಣ್ಣ ಊರಿನ ನಾಲ್ಕು ಮೂಲೆಗಳಲ್ಲಿ ಗುಂಡಿ ತೆಗೆಸಿದನು. ತೆಂಗಿನಕಾಯಿ, ನಿಂಬೆಹಣ್ಣುಗಳನ್ನು ಗುಂಡಿಯಲ್ಲಿ ಹಾಕಿಸಿ ಮುಚ್ಚಿಸಿದನು. ಆಗಾಗ್ಗೆ ದೇವರು ಮೈಮೇಲೆ ಬಂದವನಂತೆ ನಟಿಸುತ್ತಿದ್ದನು. ಅಲ್ಲಿದ್ದವರು ಪಾಪಣ್ಣನಿಗೆ ದೇವಿಯು ಒಲಿದಿದ್ದಾಳೆಂದು ನಂಬಿದರು. ಕಟ್ಟಳೆ ಕೆಲಸವನ್ನು ಮುಗಿಸಿದಾಗ ರಾತ್ರಿ ಹನ್ನೆರಡು ಗಂಟೆ ಮೀರಿತ್ತು.

ಗೌಡ ಪಾಪಣ್ಣನ ಕೆಲಸದ ಬಗ್ಗೆ ಮೆಚ್ಚಿಗೆಯ ಮಾತನ್ನು ಹೇಳಿದನು. ಭೀಮಣ್ಣ, ದೊಡ್ಡಪ್ಪ ಮತ್ತು ಊರ ಹಿರಿಯರು ಪಾಪಣ್ಣನನ್ನು ಆ ಊರಿನಲ್ಲೇ ಇರುವಂತೆ ಕೇಳಿಕೊಂಡರು. ಗೌಡನೂ ಪಾಪಣ್ಣನಿಗೆ ಸಹಾಯ ಮಾಡುವುದಾಗಿ ಹೇಳಿ, ಸದ್ಯಕ್ಕೆ ಗುಡಿಯಲ್ಲಿ ದೇವರ ಪೂಜೆ ಮಾಡಿಕೊಂಡಿರಲು ಕೇಳಿಕೊಂಡನು. ಪಾಪಣ್ಣನಿಗೆ ಒಂದು ನೆಲೆ ಬೇಕಾಗಿತ್ತು. ಆದುದರಿಂದ ಆ ಊರಿನಲ್ಲಿ ಉಳಿಯಲು ಒಪ್ಪಿಕೊಂಡನು.

ಪರದೇಶಿಯಾಗಿ ಬಂದ ಪಾಪಣ್ಣ ಪೂಜಾರಿಯಾದನು.

ಇತ್ತ ಮಧು ಪಶುವೈದ್ಯರನ್ನು ಭೇಟಿ ಮಾಡಿ ದನಗಳು ಸಾಯುತ್ತಿರುವ ವಿಷಯ ತಿಳಿಸಿದ. ಅವರು ಊರಿಗೆ ಬಂದು ದನಗಳಿಗೆ ಚುಚ್ಚುಮದ್ದನ್ನು ಕೊಟ್ಟರು. ಮೊದಮೊದಲು ಊರಿನ ಜನರು ದನಗಳಿಗೆ ಚುಚ್ಚುಮದ್ದನ್ನು ಕೊಡಿಸಲು ಒಪ್ಪಲಿಲ್ಲ. ಮಧು ಮತ್ತು ಡಾಕ್ಟರ್ ಸಾಕಷ್ಟು ಬುದ್ಧಿವಾದ ಹೇಳಿದರು. ಮನೆ ಮನೆಗೆ ಹೋಗಿ ಚುಚ್ಚುಮದ್ದನ್ನು ಕೊಟ್ಟರು.

# ಜ್ಯೋತಿಷಿಯಾದ ಪಾಪಣ್ಣ

ಪಾಪಣ್ಣ ಪ್ರತಿದಿನ ಬೆಳಿಗ್ಗೆ ಎದ್ದು ಸ್ನಾನ ಮಾಡುವನು. ಹೂವು, ಪತ್ರೆ ತರುವನು. ದೇವರ ಪೂಜೆ ಮಾಡುವನು. ತಾನೇ ಅಡಿಗೆ ಮಾಡಿಕೊಳ್ಳುವನು. ಉಪಹಾರ ಮುಗಿಸಿ ನೇರ ಗೌಡನ ಮನೆಗೆ ಬರುವನು. ಅವನ ಜೊತೆ ಅದುಇದು ಮಾತಾಡುವನು. ಮಾತಾಡುತ್ತಾ ಮಾತಾಡುತ್ತಾ ಗೌಡನ ವ್ಯವಹಾರ ತಿಳಿದುಕೊಳ್ಳುವನು. ಕೆಲವು ಬಾರಿ ತಾನೂ ಸಲಹೆ ನೀಡುವನು. ಅದರಿಂದ ಗೌಡನ ವಿಶ್ವಾಸ ಸಂಪಾದಿಸುವನು. ದಾರಿಯಲ್ಲಿ ಸಿಕ್ಕವರ ಪರಿಚಯ ಮಾಡಿಕೊಳ್ಳುವನು. ಕೆಲವರು ಮನೆಗೆ ಕರೆಯುವರು. ಅವರ ಮನೆಗಳಿಗೂ ಹೋಗುವನು. ಅವರ ಕಷ್ಟ-ಸುಖಗಳನ್ನು ಕೇಳುವನು.

ಒಂದೇ ವಾರದಲ್ಲಿ ಪಾಪಣ್ಣನಿಗೆ ಊರಿಗೆ ಊರೇ ಪರಿಚಯ ವಾಯಿತು.

ಒಂದು ದಿನ ಬೆಳಿಗ್ಗೆ ಪಾಪಣ್ಣ ಎಂದಿನಂತೆ ಗೌಡನ ಮನೆಗೆ ಬಂದನು. ಹಜಾರದಲ್ಲಿ ಗೌಡನ ಜೊತೆ ಭೀಮಣ್ಣ, ದೊಡ್ಡಪ್ಪ ಕುಳಿತಿದ್ದರು. ಗೌಡ ತಲೆಯ ಮೇಲೆ ಕೈ ಹೊತ್ತುಕೊಂಡಿದ್ದ. ಗೌಡನಿಗೆ ಯಾವುದೋ ಕಷ್ಟ ಒದಗಿರಬೇಕು ಎಂದು ಪಾಪಣ್ಣ ತಿಳಿದುಕೊಂಡನು. ಗೌಡನನ್ನು ಬುಟ್ಟಿಗೆ ಹಾಕಿಕೊಳ್ಳಲು ಇದೇ ಸಮಯ ಎಂದು ಭಾವಿಸಿದನು.

"ಗೌಡರು, ಏನೋ ಚಿಂತೆ ಮಾಡುವಂತೆ ಕಾಣುತ್ತೆ" ಎಂದು ಪಾಪಣ್ಣ ಗೌಡನನ್ನು ಮಾತಿಗೆಳೆದ. ಗೌಡನು ಮಾತಾಡಲಿಲ್ಲ. "ಅದೇ, ಜಮೀನು ವಿಚಾರ ತಾನೆ" ಎಂದು ಪಾಪಣ್ಣ ಸುಮ್ಮನೆ ಹೇಳಿದನು.

"ನಿಮಗೆ ಹೇಗೆ ತಿಳಿಯಿತು?" ಎಂದು ಗೌಡ ಸೋಜಿಗದಿಂದ ಕೇಳಿದ. ಭೀಮಣ್ಣ, ದೊಡ್ಡಪ್ಪ ಅವರೂ ಸಹ ಸೋಜಿಗ ಪಟ್ಟರು. ಪಾಪಣ್ಣನಿಗೆ "ಇದೆಲ್ಲಾ ಹೇಗೆ ತಿಳಿಯಿತು?" ಎಂದು ಮೂವರೂ ಕೇಳಿದರು. ತನಗೆ ಭವಿಷ್ಯ ಹೇಳಲು ಬರುವುದೆಂದೂ ಹಸ್ತಸಾಮುದ್ರಿಕೆಯೂ ಗೊತ್ತಿದೆ ಎಂದೂ ಪಾಪಣ್ಣ ಬುರುಡೆ ಬಿಟ್ಟನು. ಗೌಡ ಮುಂದೇನು ಮಾಡಬೇಕೆಂದು ಪಾಪಣ್ಣನನ್ನು ಕೇಳಿದನು. ಪಾಪಣ್ಣ ಗೌಡನಿಂದ ಒಂದು ಅಂಕಿಯನ್ನು ಹೇಳಿಸಿದನು. ಬೆರಳು ಎಣಿಸಿಕೊಂಡನು. ಕಣ್ಣು ಮುಚ್ಚಿಕೊಂಡು ಮನಸ್ಸಿನಲ್ಲಿ ಏನೋ ಲೆಕ್ಕಾಚಾರ ಮಡುವಂತೆ ನಟಿಸಿದನು. ಕೊನೆಗೆ "ಕೋರ್ಟಿಗೆ ಹೋದರೆ ಅನುಕೂಲ ಆಗುತ್ತೆ" ಎಂದು ಹೇಳಿದನು. ಗೌಡನಿಗೆ ಸಮಾಧಾನವಾಯಿತು.

ಭೀಮಣ್ಣ ತನ್ನ ಕೈಯ್ಯನ್ನು ಮುಂದೆ ಚಾಚಿ ಭವಿಷ್ಯ ಕೇಳಿದನು. ಪಾಪಣ್ಣ ಭೀಮಣ್ಣನ ಬಲಗೈ ನೋಡಿದನು. ಭೀಮಣ್ಣ ಮುಂದೆ ಭಾರೀ ಕುಳ ಆಗುತ್ತಾನೆಂದು ಹೇಳಿದನು. ಭೀಮಣ್ಣನಿಗೆ ಖುಷಿ ಆಯಿತು. ದೊಡ್ಡಪ್ಪನೂ ಕೈ ತೋರಿಸಿದನು. ಅವನಿಗೂ ಖುಷಿಯಾಗುವಂತೆ ಪಾಪಣ್ಣ ಭವಿಷ್ಯ ಹೇಳಿದನು. ಆದರೆ "ವ್ಯವಹಾರದಲ್ಲಿ ಹುಷಾರಾಗಿರು" ಎಂದು ಎಚ್ಚರಿಕೆ ಕೊಟ್ಟನು. ಪಾಪಣ್ಣ ಭವಿಷ್ಯ ಹೇಳುವ ವಿಷಯ ಊರಿನ ಎಲ್ಲರಿಗೂ ತಿಳಿಯಿತು.

ಜನರು ಪಾಪಣ್ಣನ ಬಳಿ ಬರತೊಡಗಿದರು. ಅವರು ಊದುಬತ್ತಿ, ಎಲೆ–ಅಡಿಕೆ ತರುವರು. ದಕ್ಷಿಣೆ ಇಡುವರು. ಅವನ ಮುಂದೆ ಕುಳಿತುಕೊಳ್ಳುವರು. ಪಾಪಣ್ಣ ತುಂಬಾ ಚಾಲಾಕಿ ಮನುಷ್ಯ. ಬಂದವರ ಮುಖವನ್ನು ನೋಡುವನು. ಅವರೇಕೆ ಬಂದಿರಬೇಕು? ಎಂದು ಮನಸ್ಸಿನಲ್ಲೇ ಊಹಿಸುವನು. ಬಂದವರ ಮುಖದಲ್ಲಿ ದುಗುಡ ಕಂಡರೆ "ಕಷ್ಟದ ವಿಚಾರ" ಎನ್ನುವನು. ಬಂದವರ ಮುಖದಲ್ಲಿ ದುಗುಡ ಕಾಣದಿದ್ದರೆ "ಲಕ್ಷ್ಮೀವಿಚಾರ" ಎನ್ನುವನು. ಆನಂತರ ಅವರನ್ನು

ಮಾತಿಗೆಳೆದು ಬಂದ ಕಾರಣವನ್ನು ತಿಳಿದುಕೊಳ್ಳುವನು. ಜನರ ಎಲ್ಲಾ ಸಮಸ್ಯೆಗಳಿಗೂ ಪಾಪಣ್ಣನಲ್ಲಿ ಸಿದ್ಧ ಪರಿಹಾರ ಸಿಗುತ್ತಿತ್ತು.

"ಏನು ಮಾಡಿದರೂ ಕೈ ಹತ್ತಲ್ಲ", "ಮುಟ್ಟಿದ್ದೆಲ್ಲಾ ಮಣ್ಣಾಗುತ್ತೆ" ಎಂದವರಿಗೆ "ದೇವರ ಹರಕೆ ತೀರಿಸಿಲ್ಲ" ಎಂದೋ, "ಗ್ರಹಗತಿ ಚೆನ್ನಾಗಿಲ್ಲ" ಎಂದೋ ಹೇಳುವನು. ದೇವರ ಹರಕೆ ತೀರಿಸು, ತಪ್ಪು ಕಾಣಿಕೆ ಕಟ್ಟು, ಪೂಜೆ ಮಾಡಿಸು ಎಂದು ಪರಿಹಾರ ಸೂಚಿಸುವನು.

"ದನಕರು ಸಾಯುತ್ತವೆ", "ಮಕ್ಕಳುಮರಿಗೆ ಯಾವಾಗಲೂ ಕಾಯಿಲೆ" ಎಂದವರಿಗೆ, "ದೆವ್ವದ ಕಾಟ" ಎಂದೋ "ಯಾರೋ ಆಗದವರು ಮಾಟ ಮಾಡಿಸಿದ್ದಾರೆ" ಎಂದೋ ಹೇಳುವನು. "ಗಾಳಿಕಲ್ಲು ಕಡೆಸು", "ಮನೆಗೆ ಕಟ್ಟಳೆ ಮಾಡಿಸು", "ಬಲಿ ಕೊಟ್ಟು ಶಾಂತಿ ಮಾಡಿಸು" – ಹೀಗೆ ಬಗೆಬಗೆಯ ಪರಿಹಾರ ಹೇಳುವನು.

ಕೆಲವರಿಗೆ ಮೂರು ದಿನ ಇಲ್ಲವೇ ಏಳು ದಿನ ಗುಡಿಯಲ್ಲಿ ಮಲಗಲು ಹೇಳುವನು. ಗ್ರಾಮ ದೇವತೆಗೆ ಶಾಂತಿ ಮಾಡಲು ಪೂಜೆ ಮಾಡುವನು.

ಮೊದ ಮೊದಲು ಪಾಪಣ್ಣನ ಬಳಿ ಗಂಡಸರು ಮಾತ್ರ ಬರುತ್ತಿದ್ದರು. ಬರುಬರುತ್ತಾ ಗಂಡಸರ ಜೊತೆ ಹೆಂಗಸರೂ ಬರತೊಡಗಿದರು. ಮುಟ್ಟು ಸರಿಯಾಗಿಲ್ಲ, ಹೆರಿಗೆ ತೊಂದರೆ, ನಿದ್ದೆ ಬರಲ್ಲ, ಮೈ–ಕೈ ನೋವು, ಎದೆ ನೋವು ಮುಂತಾಗಿ ಕೆಲವರು ಹೇಳುವರು. ಪಾಪಣ್ಣ ದೆವ್ವ–ಪೀಡೆ, ಮಾಟ–ಮಂತ್ರ, ಪೂಜೆ–ಶಾಂತಿ, ಮಡಿ–ಮೈಲಿಗೆ ಮುಂತಾಗಿ ಹೇಳುವನು. ಅನುಭವ ಬಂದಂತೆ ಹೊಸ ಹೊಸ ಉಪಾಯಗಳನ್ನು ಕಂಡುಕೊಂಡನು. ಜನರು ಪಾಪಣ್ಣನ ಉಪಾಯಗಳಿಗೆ ಮರುಳಾದರು. ಪಾಪಣ್ಣನ ಬಳಿ ಬಂದು ಹೋಗುವವರ ಸಂಖ್ಯೆ ಹೆಚ್ಚಿತು.

ದಕ್ಷಿಣೆ ರೂಪದಲ್ಲಿ ಪಾಪಣ್ಣಗೆ ಹಣ ಬರತೊಡಗಿತು. ಬಲಿ ನೆಪದಲ್ಲಿ ವಾರಕ್ಕೆ ಎರಡು–ಮೂರು ಬಾರಿ ಬಾಡಿನ ಊಟವೂ ಸಿಗುತ್ತಿತ್ತು. ದಿನ

ಕಳೆದಂತೆ ಪಾಪಣ್ಣ ಮಿರಮಿರ ಮಿಂಚತೊಡಗಿದನು.

ಮಧು, ಜನರು ಪಾಪಣ್ಣನ ಬಳಿಗೆ ಹೋಗಿ ಬರುವುದನ್ನು ಗಮನಿಸುತ್ತಿದ್ದನು. ಅವನೂ ಒಮ್ಮೆ ಖುದ್ದಾಗಿ ಪಾಪಣ್ಣನ ಬಳಿಗೆ ಹೋಗಿ ಬಂದನು. ಪಾಪಣ್ಣನ ಢೋಂಗಿತನ ತಿಳಿಯಿತು. "ಪಾಪಣ್ಣ ಪಂಡಿತನಲ್ಲ, ಅವನ ಮಾತನ್ನು ನಂಬಿ ಹಾಳಾಗಬೇಡಿ" ಎಂದು ಮಧು ಜನರಿಗೆ ತಿಳಿಸಿದನು. ಯಾರೂ ಅವನ ಮಾತಿಗೆ ಕಿವಿಗೊಡಲಿಲ್ಲ. ಜನರ ಅಜ್ಞಾನವೇ ಪಾಪಣ್ಣನ ಬಂಡವಾಳ ಎಂದು ಮಧು ತೀರ್ಮಾನಿಸಿ ಸುಮ್ಮನಾದನು.

# ಪವಾಡ ಪುರುಷನಾದ ಪಾಪಣ್ಣ

ಚಡ್ಡೀಚಿಕ್ಕ ತಂದೆಗೆ ಒಬ್ಬನೇ ಮಗ. ಎಳೆ ವಯಸ್ಸಿನಲ್ಲೇ ತಾಯಿಯನ್ನು ಕಳೆದುಕೊಂಡ ಅವನು ಅಜ್ಜಿಯ ಮನೆಯಲ್ಲಿ ಬೆಳೆದನು. 'ತಾಯಿ ಸತ್ತ ಮಗ' ಎಂದು ಅಜ್ಜಿ ಮುದ್ದಿನಿಂದ ಸಾಕಿದಳು. ಚಿಕ್ಕನಿಗೆ ಮೈ ಬೆಳೆಯಿತೇ ಹೊರತು ಬುದ್ಧಿ ಬೆಳೆಯಲಿಲ್ಲ. ಅಜ್ಜಿಯೂ ತೀರಿಕೊಂಡಳು. ಮತ್ತೆ ಅವನು ಅಪ್ಪನ ಮನೆ ಸೇರಿದ. ಅವರಪ್ಪ ಜಿಪುಣ. ಚಿಕ್ಕನನ್ನು ಶಾಲೆಗೆ ಕಳಿಸಲಿಲ್ಲ. ಬದಲಾಗಿ ಕೆಲಸಕ್ಕೆ ಹಚ್ಚಿದ. ಚಿಕ್ಕನಿಗೆ ಅವರಪ್ಪ ದೊಡ್ಡ ಅಳತೆಯ ಬಟ್ಟೆಗಳನ್ನು ತರುತ್ತಿದ್ದ. ಚಿಕ್ಕನ ಚಡ್ಡಿ ಮೊಣಕಾಲಿನ ಕೆಳಗಿನವರೆಗೂ ಬರುತ್ತಿತ್ತು. ಆದ್ದರಿಂದ ಚಿಕ್ಕನ ವಾರಗೆಯ ಹುಡುಗರು ಅವನನ್ನು 'ಚಡ್ಡೀ ಚಿಕ್ಕ' ಎಂದು ಗೇಲಿ ಮಾಡುತ್ತಿದ್ದರು.

ಚಿಕ್ಕನಿಗೆ ಹದಿನಾರು ವರ್ಷ ತುಂಬಿತು. ಆಗಲೇ ಅವರಪ್ಪ ಚಿಕ್ಕನಿಗೆ ಹೆಣ್ಣು ಹುಡುಕಲು ಶುರು ಮಾಡಿದ. ಮಗನ ಮದುವೆ ಮಾಡಿ ವರದಕ್ಷಿಣೆಯ ಹಣ ಗಳಿಸುವ ದುರಾಸೆ ಅವನದು. ಈ ವಿಷಯ ಚಿಕ್ಕನ ಗೆಳೆಯರಿಗೆ ತಿಳಿಯಿತು.

"ಚಿಕ್ಕ ನಿನಗೆ ಮದುವೆಯಂತೆ. ನಿನ್ನಂತ ಗಮಾರನ್ನ ಯಾವ ಹುಡುಗಿ ಒಪ್ಪಿ ಮದುವೆ ಆಗ್ತಾಳೆ" ಎಂದು ಅವರು ತಮಾಷೆ ಮಾಡಿದರು. ಗೆಳೆಯರ ಅಣಕದ ಮಾತನ್ನು ಕೇಳಿ ಚಿಕ್ಕನಿಗೆ ಬೇಸರವಾಯಿತು. ಅವನ ಮನಸ್ಸು ಕೆಟ್ಟಿತು. ಅವನು ಕೆಲಸ ಮಾಡುವುದನ್ನು ನಿಲ್ಲಿಸಿ ಸುಮ್ಮನೆ ಅಲೆಯತೊಡಗಿದ.

ಒಂದು ಸಂಜೆ ಚಿಕ್ಕ ಬೇಸರವಾಗಿ ಗುಡಿಯ ಕಟ್ಟೆಯ ಮೇಲೆ ಕುಳಿತಿದ್ದ. ಚಿಕ್ಕನನ್ನು ನೋಡಿದ ಪಾಪಣ್ಣ ಹತ್ತಿರ ಕರೆದ. ಚಿಕ್ಕನ ಮುಖ ಮಂಕಾಗಿರುವುದನ್ನು ಕಂಡ ಅವನು ಕಾರಣವೇನು ಎಂದು ಕೇಳಿದ. ಚಿಕ್ಕ ಮಾತಾಡಲಿಲ್ಲ, ಗಳಗಳನೆ ಅಳತೊಡಗಿದ. ಪಾಪಣ್ಣ ಚಿಕ್ಕನಿಗೆ ಸಮಾಧಾನ ಮಾಡಿದ. ಚಿಕ್ಕ ತನ್ನ ಗೆಳೆಯರು ಅಣಕವಾಡುವುದನ್ನು ತಿಳಿಸಿದ.

ಚಿಕ್ಕನಿಗೆ ಹೆಣ್ಣು ಗೊತ್ತಾಗಿರುವುದನ್ನು ಚಿಕ್ಕನ ಅಪ್ಪನೇ ಪಾಪಣ್ಣನಿಗೆ ತಿಳಿಸಿದ್ದ. ಅವನು ಚಿಕ್ಕನಿಗೆ ಮದುವೆ ಆಗಿಯೇ ತೀರುತ್ತದೆ, ಹೆದರಲು ಕಾರಣವಿಲ್ಲ ಎಂದು ಹೇಳಿದ. ಚಿಕ್ಕನಿಗೆ ನಂಬಿಕೆ ಬರಲಿಲ್ಲ.

ಪಾಪಣ್ಣ ಊದುಬತ್ತಿ ಹಚ್ಚಿದ. ಊದುಬತ್ತಿಯ ಹೊಗೆಯಲ್ಲಿ ಒಂದು ತಾಯಿತ ಹಿಡಿದ. ಕಣ್ಣು ಮುಚ್ಚಿ ಮಂತ್ರ ಜಪಿಸುವಂತೆ ನಟಿಸಿದ. ಚಿಕ್ಕ ಕೈಕಟ್ಟಿ ಭಯಭಕ್ತಿಯಿಂದ ಕುಳಿತಿದ್ದ. ಪಾಪಣ್ಣ ಕಣ್ಣು ತೆರೆದು ತಾಯಿತವನ್ನು ಚಿಕ್ಕನಿಗೆ ಕೊಟ್ಟ.

"ಚಿಕ್ಕ ಈ ತಾಯಿತವನ್ನು ಕಟ್ಟಿಕೊ. ನಿನ್ನನ್ನು ನೋಡಿದ ತಕ್ಷಣ ಯಾವ ಹುಡುಗಿಯಾದರೂ ಒಪ್ಪಿಕೊಳ್ಳುತ್ತಾಳೆ" ಎಂದ ಪಾಪಣ್ಣ. ಚಿಕ್ಕ ತಾಯಿತವನ್ನು ತನ್ನ ಬಲಗೈ ತೋಳಿಗೆ ಕಟ್ಟಿಕೊಂಡ. ಅವನಿಗೆ ಪಾಪಣ್ಣ ದೇವರಂತೆ ಕಾಣತೊಡಗಿದನು.

ಇದಾದ ಒಂದು ವಾರದಲ್ಲೇ ಚಿಕ್ಕನ ಮದುವೆಯ ಮಾತುಕತೆ ಆಯಿತು. ಚಿಕ್ಕನ ಆನಂದ ಹೇಳತೀರದು. ಪಾಪಣ್ಣ ಕೊಟ್ಟಿದ್ದ ತಾಯಿತದ ಮಹಿಮೆಯಿಂದ ತನ್ನ ಮದುವೆ ಗೊತ್ತಾಯಿತು ಎಂದು ಚಿಕ್ಕ ಕಂಡ ಕಂಡವರಿಗೆಲ್ಲಾ ಹೇಳಿದ. ಬಲಗೈ ತೋಳಿನಲ್ಲಿದ್ದ ತಾಯಿತವನ್ನೂ ತೋರಿಸಿದ. ಹೆಣ್ಣಿಗೆ ಮೈತುಂಬ ಒಡವೆ ಹಾಕಿದ್ದರು. ಚಿಕ್ಕನಿಗೆ ಕೈ ತುಂಬ ದುಡ್ಡು ಕೊಟ್ಟರು. ಮದುವೆಯನ್ನೂ ಚೆನ್ನಾಗಿ ಮಾಡಿಕೊಟ್ಟರು. ವಡ್ಡನಾದ ಚಿಕ್ಕನಿಗೆ ಇಂಥ ಸಂಬಂಧ ಕೂಡಿ ಬರುವುದಕ್ಕೆ ಪಾಪಣ್ಣ

ನೀಡಿದ್ದ ತಾಯಿತವೇ ಕಾರಣವಾಗಿದೆ ಎಂದು ಕೆಲವರು ಸುದ್ದಿ ಹಬ್ಬಿಸಿದರು.

ಚಿಕ್ಕ ಮದುವೆ ಮುಗಿದ ಮೇಲೆ ಗುಡಿಗೆ ಬಂದ. ಹೆಂಡತಿಯನ್ನು ಜೊತೆಯಲ್ಲಿ ಕರೆತಂದ. ಪಾಪಣ್ಣಗೆ ಕಾಣಿಕೆ ಒಪ್ಪಿಸಿ ಆಶೀರ್ವಾದ ಪಡೆದ. ಆದರೆ ಚಿಕ್ಕನ ಸಂತೋಷ ಬಹಳ ದಿನ ಉಳಿಯಲಿಲ್ಲ. ಹುಡುಗಿ ಬುದ್ಧಿಮಾಂದ್ಯಳಾಗಿದ್ದಳು.

ಚಿಕ್ಕನ ಮದುವೆಯಾದ ಮೇಲೆ ಪಾಪಣ್ಣನ ತಾಯಿತಕ್ಕೆ ಬೇಡಿಕೆ ಹೆಚ್ಚಾಯಿತು. ಬೇಡಿಕೆ ಹೆಚ್ಚಾದಂತೆ ತಾಯಿತದ ಬೆಲೆಯೂ ಏರಿತು. ತಾಯಿತದ ಬೆಲೆ ಏರಿದಂತೆ ಪಾಪಣ್ಣನ ದುಡ್ಡಿನ ಗಂಟೂ ದೊಡ್ಡದಾಯಿತು.

ಮುಂಗಾರಿನಲ್ಲಿ ಮೃಗಶಿರಾ ಮಳೆ ಬಂದಿತ್ತು. ಬಿತ್ತನೆಯೂ ಆಗಿತ್ತು. ಆರಿದ್ರಾ ಹದ ಮಾಡಿತ್ತು. ಕಳೆ ತೆಗೆದ ಮೇಲೆ ಉತ್ತರೆ ಮಳೆ ಮುಗಿಯುತ್ತಾ ಬಂತು. ಮತ್ತೆ ಮಳೆ ಬರಲಿಲ್ಲ. ಜನರು ಕಂಗಾಲಾದರು. "ಮಕ್ಕಳುಮರಿಯನ್ನು ಸಾಕೋದು ಹೇಗೆ? ದನಕರುಗಳನ್ನು ಉಳಿಸಿಕೊಳ್ಳೋದು ಹೇಗೆ?" ಎಂಬುದೇ ಎಲ್ಲರ ಚಿಂತೆ. ಎಲ್ಲೆಲ್ಲೂ ಬರದ ಛಾಯೆ ಕಾಣತೊಡಗಿತು.

ಜನರ ಕಷ್ಟ ನೋಡಲಾರದೆ ಮಧು ಸರ್ಕಾರದ ನೆರವು ಪಡೆಯಲು ಓಡಾಡತೊಡಗಿದ. ಜಿಲ್ಲಾಧಿಕಾರಿಗೆ ಪತ್ರ ಬರೆದ. ತಹಸೀಲ್ದಾರ, ಬಿ.ಡಿ.ಓ. ರವರನ್ನು ಭೇಟಿ ಮಾಡಿದ. ಕಾಮಗಾರಿ ಕೆಲಸಗಳನ್ನು ಆರಂಭಿಸುವ ಭರವಸೆ ಪಡೆದು ಬಂದ. ದನಗಳಿಗೆ ಮೇವನ್ನು ದೊರಕಿಸಿಕೊಳ್ಳುವ ಪ್ರಯತ್ನ ಕೂಡ ಮಾಡತೊಡಗಿದ.

ಇತ್ತ ಗೌಡ ಮಳೆ ಬಾರದ ಕಾರಣ ಗ್ರಾಮಸ್ಥರ ಸಭೆ ಕರೆದ. ಅವನು ಪಾಪಣ್ಣನನ್ನೂ ಕರೆಸಿಕೊಂಡಿದ್ದ. ಮಧು ಮಾತ್ರ ತಾನಾಗಿಯೇ ಸಭೆಗೆ ಬಂದು ದೂರದಲ್ಲಿ ಕುಳಿತಿದ್ದನು.

“ಮುಗಿಲು ನೋಡಿ ನೋಡಿ ಕಣ್ಣು ಬೆಳ್ಳಗಾದವು. ಮಳೆ ಮಾತ್ರ ಬರಲಿಲ್ಲ. ಈಗೇನು ಮಾಡೋದು?” ಎಂದು ಜನರನ್ನು ಕೇಳಿದನು ಗೌಡ.

“ಆದ್ರಿ ಮಳೆ ಹೋಗೋವಾಗ ಗುಡುಗಿತ್ತಲ್ಲ. ಅವತ್ತೆ ನನಗೆ ಗೊತ್ತಾಗಿತ್ತು. ಈ ವರ್ಷ ಬರಗಾಲ ಬರುತ್ತೆ ಅಂತ” ಎಂದು ಗುಡಿಕಾರ ಗುಡ್ಡಪ್ಪ ಎಲ್ಲ ಬಲ್ಲವನಂತೆ ಹೇಳಿದ.

“ಬರಗಾಲ ಬಂದಿರೋದು ಅದಕ್ಕಲ್ಲ. ಹಿಂದೆ ದೇವರ ಕೆಲಸ ನಿಲ್ಲಿಸಿದೆವಲ್ಲ ಅದಕ್ಕೆ” ಎಂದು ತುಸು ಕೋಪದಿಂದ ಹಿಂದಿನದನ್ನು ನೆನೆಸಿಕೊಂಡು ಹೇಳಿದ ಭೀಮಣ್ಣ.

“ನಮ್ಮನ್ನು ಕಾಪಾಡೋ ದೇವರನ್ನು ಮೂಲೆಗೆ ತಳ್ಳಿದರೆ ಬರಗಾಲ ಬರಬೇಕಾದ್ದೇ. ಇನ್ನೂ ಏನೇನು ಕೇಡು ಕಾದಿದೆಯೋ?” ಎಂಬ ಹೆದರಿಕೆ ದೊಡ್ಡಪ್ಪನದು.

ಜನರೆಲ್ಲಾ, “ಹಿಂದೆ ದೇವರಿಗೆ ಬಲಿ ಕೊಡದೆ ತಪ್ಪಾಯಿತು” ಎಂದು ಮಾತಾಡತೊಡಗಿದರು. ಕೆಲವರು ಮಧುವನ್ನು ನಿಂದಿಸಿ ಮಾತಾಡಿದರು. ಪಾಪಣ್ಣಗೆ ಒಳಗೊಳಗೇ ಖುಷಿಯಾಯಿತು. ಮಧು ನೊಂದುಕೊಂಡನು. ಆದರೂ ಮಾತಾಡದೆ ಸುಮ್ಮನಿದ್ದನು.

“ಆಗಿದ್ದು ಆಗಿ ಹೋಯ್ತು, ಮುಂದೆ ನಡೆಯೋದನ್ನ ಮಾತಾಡಿ” ಎಂದ ಗೌಡ.

“ಬಲಿ ಕೊಡದೆ ಇದ್ದರೆ, ಬಂದಿರೋ ಕಷ್ಟ ಬಗೆ ಹರಿಯಲ್ಲ” ಎಂದು ಪಾಪಣ್ಣ ತನ್ನ ಅಭಿಪ್ರಾಯ ತಿಳಿಸಿದನು. ಯಾರೂ ಮರು ಮಾತಾಡಲಿಲ್ಲ.

ಮಧುವಿಗೆ ಇದು ಸರಿ ಕಾಣಲಿಲ್ಲ. “ಬಲಿಗಿಲಿ ಅಂತ ಜನರಿಗೆ ಏಕೆ ಕಷ್ಟ ಕೊಡುತ್ತೀರಿ? ಅಲ್ಲದೆ ಬಲಿ ಕೊಟ್ಟರೆ ಮಳೆ ಬರೋ ಖಾತರಿ ಏನು?” ಎಂದು ಮಧು ಎದ್ದು ನಿಂತು ಕೇಳಿದ.

"ಬಲಿ ಕೊಟ್ಟ ಮೇಲೆ ಮಳೆ ಬರದೆ ಇದ್ದರೆ ನಿಮಗೆ ಮುಖ ತೋರಿಸಲ್ಲ!" ಎಂದು ಪಾಪಣ್ಣ ಸವಾಲು ಹಾಕಿದ.

ಮಧು ಮತ್ತೇನೋ ಹೇಳಲು ಹೋದನು. ಆದರೆ ಜನರು ಅವನಿಗೆ ಮಾತಾಡಲು ಬಿಡಲಿಲ್ಲ. ಮಧು ಮರು ಮಾತಾಡದೆ ಅಲ್ಲಿಂದ ಹೊರಟು ಹೋದನು.

ಬರುವ ಅಮಾವಾಸ್ಯೆ ದಿನ ಬಲಿ ಕೊಡಲು ತೀರ್ಮಾನವಾಯಿತು. ಊರ ಜನರು ಬಲಿ ಕೊಡಲು ಕೋಣವನ್ನು ಹಿಡಿದು ತಂದರು. ಬೇಕಾದ ಸಾಮಾನುಗಳನ್ನು ಹೊಂದಿಸಿದರು.

ಅಮಾವಾಸ್ಯೆಯ ದಿನ ಜನರಿಗೆ ಸಡಗರವೋ ಸಡಗರ. ಬೆಳಿಗ್ಗೆಯಿಂದಲೇ ಬೀಗರು ಬರಲಾರಂಭಿಸಿದರು. ಹೆಂಗಸರು ಮನೆಯ ಅಂಗಳ ಸಾರಿಸಿ ರಂಗೋಲಿ ಬಿಡಿಸಿ, ಅಲಂಕಾರ ಮಾಡಿದರು. ಕುಲವಾಡಿಗಳು ಊರೆಲ್ಲಾ ಗುಡಿಸಿ ನೀರು ಹಾಕಿ, ಹೆಬ್ಬಾಗಿಲಿಗೆ ತೋರಣ ಕಟ್ಟಿದರು. ಗಂಡಸರು ಬೀಗರನ್ನು ನೋಡಿಕೊಳ್ಳುವುದು, ಸಾಮಾನುಗಳನ್ನು ಹೊಂದಿಸುವುದನ್ನು ಮಾಡುತ್ತಿದ್ದರು. ಮಕ್ಕಳಿಗಂತು ಆನಂದವೋ ಆನಂದ. ಸಡಗರದಿಂದ ಅವರು ಕುಣಿದಾಡುತ್ತಿದ್ದರು.

ಪಾಪಣ್ಣ ತುಂಬಾ ಉತ್ಸಾಹದಿಂದ ಓಡಾಡುತ್ತಿದ್ದನು. ಅವನು ಊರ ಹಿರಿಯರಿಗೆ, ತಳವಾರರಿಗೆ ಸೂಚನೆ ನೀಡುತ್ತಿದ್ದನು. ಅವರು ಪಾಪಣ್ಣ ಹೇಳಿದಂತೆ ಎಲ್ಲವನ್ನೂ ಅಣಿಗೊಳಿಸಿದರು.

ಮಧ್ಯಾಹ್ನದ ವೇಳೆಗೆ ವಾದ್ಯಗಳು ಶುರುವಾದವು. ವಾದ್ಯಗಳ ಧ್ವನಿ ಕೇಳಿ ಹುಡುಗರು ಗುಡಿಯ ಬಳಿ ಬಂದು ತಾಳಕ್ಕೆ ತಕ್ಕಂತೆ ಕುಣಿಯ ತೊಡಗಿದರು. ಊರಿನ ಗಂಡಸರು ಬಂದು ಗುಡಿಯ ಮುಂದೆ ಸೇರಿದರು.

ಪಾಪಣ್ಣ ದೇವರಿಗೆ ಪೂಜೆ ಮಾಡಿದನು. ಅವನ ಸೂಚನೆಯಂತೆ ದೇವರ ಮೆರವಣಿಗೆ ಹೊರಟಿತು. ಅದು ಊರಿನ ಬೀದಿಗಳಲ್ಲಿ ಸಾಗಿತು.

ಆರತಿ ಹಿಡಿದ ಹೆಂಗಸರು ಮೆರವಣಿಗೆಯಲ್ಲಿ ಸೇರಿಕೊಂಡರು. ಮೆರವಣಿಗೆ ಮತ್ತೆ ಗುಡಿಯ ಬಳಿ ಬಂದಿತು.

ಗುಡಿಯ ಮುಂದೆ ಕಾಲಿಡಲೂ ಜಾಗವಿರಲಿಲ್ಲ. ಗುಡಿಯ ಮುಂದಿನ ಅಂಗಳದಲ್ಲಿ ಜನರೋ ಜನರು. ಪಾಪಣ್ಣ ಸವಾಲು ಹಾಕಿದ ವಿಷಯ ಅಕ್ಕಪಕ್ಕದ ಊರಿನವರಿಗೂ ತಿಳಿದಿತ್ತು. ಪಾಪಣ್ಣ ಮಾಡುವ ಶಾಂತಿಯನ್ನು ನೋಡಲು ಎಲ್ಲರೂ ನಾ ಮುಂದು ತಾ ಮುಂದು ಎಂದು ತಳ್ಳಾಡುತ್ತಿದ್ದರು.

ಪಾಪಣ್ಣ ಮತ್ತೆ ದೇವರಿಗೆ ಮಹಾ ಮಂಗಳಾರತಿ ಮಾಡಿದನು. ತಕ್ಷಣ ಆವೇಶ ಬಂದವನಂತೆ ಮೈ-ಕೈ ನಡುಗಿಸಿದನು. ತೊದಲುತ್ತ ಮಾತಾಡಿದನು. ಕೋಣವನ್ನು ಎಳೆದು ತರಲು ಸನ್ನೆ ಮಾಡಿದನು. ವಾದ್ಯಗಳು ಜೋರಾದವು. ಕೋಣವನ್ನು ದುರದುರನೆ ನೋಡಿದನು. ಅದಕ್ಕೆ ಹೂವು ಪತ್ರೆ ಎಸೆದನು. ಅರಸಿನ ಕುಂಕುಮ ಬಳಿದನು. ಕಣ್ಣು ಮುಚ್ಚಿ ಮಂತ್ರ ಹೇಳುವಂತೆ ನಟಿಸಿದನು. ಬೇವಿನ ಸೊಪ್ಪಿನಿಂದ ನೀವಾಳಿಸಿದನು. ಅವನು ಮಾಡುತ್ತಿದ್ದುದನ್ನೆಲ್ಲ ಜನರು ಬೆರಗಿನಿಂದ ನೋಡಿದರು. ಅವನು ವಾದ್ಯಗಳನ್ನು ಮತ್ತಷ್ಟು ಜೋರಾಗಿ ಬಾರಿಸುವಂತೆ ಹೇಳಿದನು.

ಪಾಪಣ್ಣ ಕೋಣವನ್ನು ಬಲಿ ಕೊಡಲು ಹೇಳಿದನು.

ಅದರ ಕತ್ತನ್ನು ತುಂಡರಿಸಲಾಯಿತು. ಜನರು ತಾವು ಎಳೆದು ತಂದಿದ್ದ ಕುರಿ, ಕೋಳಿಗಳನ್ನು ಬಲಿ ಕೊಟ್ಟರು. ಹೆಂಗಸರು ದೇವರಿಗೆ ಆರತಿ ಬೆಳಗಿ ಹೊರಟರು.

ಊರಿನ ಜನ ನೆಂಟರಿಷ್ಟರ ಜೊತೆ ಬಾಡಿನೂಟ ಮಾಡಿ ಮಲಗಿದರು. ಊರವರು, ಬಂದ ಬೀಗರು ಪಾಪಣ್ಣನನ್ನು ಹೊಗಳಿದ್ದೇ ಹೊಗಳಿದ್ದು.

ಆಗ ಸಮುದ್ರದಲ್ಲಿ ಚಂಡ ಮಾರುತ ಎದ್ದಿತ್ತು. ಕಾಕತಾಳೀಯ ಎಂಬಂತೆ ಬಲಿಕೊಟ್ಟ ಆ ರಾತ್ರಿಯೇ ಮಳೆ ಸುರಿದು ಬಿಡುವುದೆ!

ಹವಾಮಾನ ವರದಿಯನ್ನು ಕೇಳಿದ್ದ ಮಧು ಅಮಾವಾಸ್ಯೆಯ ಆ ದಿನ ಮಳೆ ಬರಬಹುದೆಂದು ಹೇಳುತ್ತಿದ್ದ. ಆದರೆ ಅವನ ಮಾತನ್ನು ನಂಬುವರಾರು ಇರಲಿಲ್ಲ.

ಊರವರ ದೃಷ್ಟಿಯಲ್ಲಿ ಪಾಪಣ್ಣ 'ಪವಾಡ ಪುರುಷ'ನಾಗಿದ್ದ.



# ಪರಾರಿಯಾದ ಪಾಪಣ್ಣ

ಪವಾಡ ಮಾಡಿ ಪಾಪಣ್ಣ ಮಳೆ ಬರಿಸಿದ ಎಂಬ ಸುದ್ದಿ ದೂರದ ಊರುಗಳಿಗೂ ಹರಡಿತು. ದೂರದ ಊರುಗಳಿಂದ ಜನರು ಪಾಪಣ್ಣನ ಬಳಿ ಭವಿಷ್ಯ ಕೇಳಲು ಬರತೊಡಗಿದರು. ದಿನಕ್ಕೆ ನೂರಾರು ರೂಪಾಯಿ ಹಣ ಸಿಗುತ್ತಿತ್ತು. ಹಣ ಸೇರಿದಂತೆ ಪಾಪಣ್ಣಗೆ ಅಹಂಕಾರ ಬೆಳೆಯಿತು. ಅವನ ನಡವಳಿಕೆ ಬದಲಾಯಿತು. ಆತ ಊರಿನ ಜನರ ಬಗ್ಗೆ ಅಸಡ್ಡೆ ತೋರಿಸಲಾರಂಭಿಸಿದನು. ಹಿಂದೆ ಅವನು ಹೇಳಿದ್ದ ಎಷ್ಟೋ ಮಾತುಗಳು ಸುಳ್ಳಾಗಿದ್ದವು. ಆದರೂ ಮಳೆ ಬಂದ ಘಟನೆ ಮತ್ತೆ ಜನರಲ್ಲಿ ಪಾಪಣ್ಣನ ಬಗ್ಗೆ ನಂಬಿಕೆ ಹುಟ್ಟಿಸಿತು.

ಹಿಂಗಾರು ಮಳೆ ಕಾಲ ಕಾಲಕ್ಕೆ ಸುರಿಯಿತು. ತಕ್ಕ ಮಟ್ಟಿಗೆ ಬೆಳೆಯೂ ಆಯಿತು. ಒಕ್ಕಣೆ ಮುಗಿಸಿ, ಜನರು ಮದುವೆ, ಜಾತ್ರೆ ಎಂದು ಊರೂರಿಗೆ ಹೋಗಿ ಬರಲು ಆರಂಭಿಸಿದರು.

ಈ ನಡುವೆ ಗುಡ್ಡಪ್ಪನ ಮಗಳ ಮದುವೆ ಆಯಿತು. ಗಂಡಿನ ಕಡೆಯವರು ದೂರದ ಊರಿನವರು. ಬೀಗರೊಡನೆ, ಮಧುವಿನ ಜೊತೆ ಓದುತ್ತಿದ್ದ ಒಬ್ಬ ಸ್ನೇಹಿತನೂ ಬಂದಿದ್ದ. ಆದ್ದರಿಂದ ಮಧು ಮದುವೆ ಮನೆಯಲ್ಲೇ ಓಡಾಡಿಕೊಂಡಿದ್ದ.

ಮದುವೆಯ ದಿನ ಮಾಂಗಲ್ಯ ಧಾರಣೆ ಸಮಯಕ್ಕೆ ಊರ ಜನ ಸೇರಿದರು. ಪಾಪಣ್ಣನು ಗೌಡನ ಜೊತೆ ಬಂದನು. ಮಾಂಗಲ್ಯ ಧಾರಣೆ ಮುಗಿಯಿತು. ಊಟ ಮುಗಿಸಿ ಊರವರು ಹೊರಟು ಹೋದರು.

ಮಧುವಿನ ಸಹಪಾಠಿ ಪಾಪಣ್ಣನನ್ನು ತೋರಿಸಿ, ಈತ ತಮ್ಮ ಊರಿನವನೆಂದೂ ಕಳ್ಳತನ ಮಾಡಿ ಸಿಕ್ಕಿಬಿದ್ದು ಊರು ಬಿಟ್ಟು ಓಡಿಹೋದವನೆಂದೂ ತಿಳಿಸಿದನು. ಮೊದಲೇ ಪಾಪಣ್ಣನ ಕುತಂತ್ರಗಳನ್ನು ಕಂಡಿದ್ದ ಮಧುವಿಗೆ ಅವನ ಬಣ್ಣ ಬಯಲು ಮಾಡಲು ಒಳ್ಳೆಯ ಕಾರಣ ಸಿಕ್ಕಿತು.

ಗೆಳೆಯ ಒತ್ತಾಯ ಮಾಡಿದ್ದರಿಂದ ಮಧು ಬೇಗರೊಡನೆ ಗಂಡಿನ ಊರಿಗೂ ಹೋದನು.

ಗುಡ್ಡಪ್ಪನ ಮಗಳ ಮದುವೆ ಮುಗಿದು ಮೂರು ದಿನಗಳೂ ಕಳೆದಿರಲಿಲ್ಲ. ಊರಿನ ಐದಾರು ಹುಡುಗರಿಗೆ ಹೊಟ್ಟೆ ನೋವು ಶುರುವಾಯಿತು. ಅವರ ಅಪ್ಪಂದಿರು ಹುಡುಗರನ್ನು ಪಾಪಣ್ಣನ ಬಳಿಗೆ ಕರೆದುಕೊಂಡು ಬಂದರು.

ಪಾಪಣ್ಣ ಮಕ್ಕಳನ್ನು ಕಣ್ಣೆತ್ತಿಯೂ ನೋಡಲಿಲ್ಲ. “ಮದುವೆ ಊಟ ಚೆನ್ನಾಗಿ ತಿಂದು ಅಜೀರ್ಣ ಆಗಿದೆ. ನಾಳೆ ಬೆಳಗ್ಗೆವರೆಗೆ ತಿನ್ನಲಿಕ್ಕೆ ಏನೂ ಕೊಡಬೇಡಿ” ಎಂದು ಹೇಳಿ ಕಳಿಸಿದನು. ಆ ದಿನ ಸಂಜೆಯ ವೇಳೆಗೆ ಮಕ್ಕಳಿಗೆ ಭೇದಿ ಶುರುವಾಯಿತು. ಪಾಪಣ್ಣ ಹೇಳಿದಂತೆ ಮಕ್ಕಳಿಗೆ ತಿನ್ನಲಿಕ್ಕೆ ಅವರು ಏನನ್ನೂ ಕೊಡಲಿಲ್ಲ. ಮಕ್ಕಳು ಬಳಲಿದರು.

ಮಾರನೆಯ ದಿನ ಮತ್ತೆ ನಾಲ್ಕಾರು ಮಕ್ಕಳಿಗೆ ಭೇದಿ ಶುರುವಾಯಿತು.

ಊರ ಹೊರಗಿನ ಕೆರೆಯಲ್ಲಿ ಈ ಮಕ್ಕಳು ದಿನಾಲು ಈಜಾಡಲು ಹೋಗುತ್ತಿದ್ದರು. ಅದೇ ಕೆರೆಯಲ್ಲಿ ಊರ ಜನ ಬಟ್ಟೆ ಒಗೆಯುತ್ತಿದ್ದರು. ಎತ್ತು, ಎಮ್ಮೆಗಳ ಮೈತೊಳೆಯುತ್ತಿದ್ದರು. ಬೆಳಿಗ್ಗೆ ಊರ ಗಂಡಸರು ಕೆರೆಯ ದಂಡೆಯಲ್ಲಿ ಕಕ್ಕಸ್ಸು ಮಾಡುತ್ತಿದ್ದರು. ತೆಂಗಿನ ಮಟ್ಟೆಯನ್ನು ಕೆರೆಯ ನೀರಿನಲ್ಲಿ ಕೊಳೆಯಲು ಹಾಕುತ್ತಿದ್ದರು. ಹೀಗಾಗಿ ನೀರು ಕಲುಷಿತವಾಗಿತ್ತು. ಕೆರೆಯ ನೀರಿನಲ್ಲಿ ಈಜುವ ಹುಡುಗರು ಬಾಯಾರಿದಾಗ ಅದೇ ನೀರನ್ನು ಕುಡಿಯುತ್ತಿದ್ದರು.

ಹೀಗೆ ಕಲುಷಿತ ನೀರು ಕುಡಿದ ಮಕ್ಕಳಿಗೆಲ್ಲಾ ಭೇದಿ ಶುರುವಾಗಿತ್ತು. ಭೀಮಣ್ಣನ ಮಗನಿಗೂ ಭೇದಿ ಶುರುವಾಯಿತು. ಭೀಮಣ್ಣನಿಗೆ ಮೂರು ಹೆಣ್ಣು ಮಕ್ಕಳ ನಂತರ ಒಬ್ಬ ಮಗ ಹುಟ್ಟಿದ್ದ. ತನ್ನ ಮಗ ತುಂಬಾ ಅದೃಷ್ಟವಂತ ಎಂದು ಅವನು ನಂಬಿದ್ದ. ಮಗನಿಗೆ ಭೇದಿ ಶುರುವಾದ ತಕ್ಷಣ ಅವನನ್ನು ಪಾಪಣ್ಣನ ಬಳಿಗೆ ಕರೆತಂದ. ಪಾಪಣ್ಣ ಭೀಮಣ್ಣನಿಗೂ ಇತರರಿಗೆ ಹೇಳಿದಂತೆ ಹೇಳಿದ. ತನ್ನ ಮಗ ಮದುವೆ ಊಟ ಮಾಡಿಲ್ಲವೆಂದು ಭೀಮಣ್ಣ ಖಾತರಿಪಡಿಸಿದ.

"ಹಾಗಾದರೆ 'ಕಾಲುಧೂಳು' ಆಗಿದೆ. ನಿನ್ನ ಹೆಂಡತಿಗೆ ಹೇಳಿ ಅನ್ನ ನೀವಳಿಸಿ ಹಾಕಿಸು" ಎಂದು ಹೇಳಿ ಭೀಮಣ್ಣನನ್ನು ವಾಪಾಸು ಕಳುಹಿಸಿದನು. ಬೇರೆಯವರೂ ಮತ್ತೆ ಮಕ್ಕಳನ್ನು ಕರೆತಂದರು. "ದೇವರಿಗೆ ಹರಕೆ ಮಾಡಿಕೊಳ್ಳಿ" ಎಂದು ಹೇಳಿ ಕಳುಹಿಸಿದನು.

ಯಾವುದೂ ಪ್ರಯೋಜನ ಆಗಲಿಲ್ಲ. ಒಂದು ದಿನ ಕಳೆಯಿತು. ಎರಡು ದಿನ ಕಳೆಯಿತು. ಮಕ್ಕಳು ದಿನೇ ದಿನೇ ಕೃಶವಾದರು. ಕಣ್ಣನ್ನು ತೆರೆಯುತ್ತಿರಲೇ ಇರಲಿಲ್ಲ. ಎರಡು ಮಕ್ಕಳ ಸ್ಥಿತಿ ತೀರಾ ಹದಗೆಟ್ಟಿತು. ಪಾಪಣ್ಣ ಕೊಟ್ಟ ತಾಯಿತವು ಮಕ್ಕಳ ಭೇದಿಯನ್ನು ನಿಲ್ಲಿಸಲಿಲ್ಲ.

ಜನರು ಪಾಪಣ್ಣ ಹೇಳಿದಂತೆ ನಡೆದುಕೊಂಡರು. ಕೊನೆಗೆ ಪಾಪಣ್ಣ ಎಲ್ಲಾ ಮಕ್ಕಳನ್ನು ಗುಡಿಯಲ್ಲಿ ಮಲಗಿಸಿಕೊಳ್ಳಲು ಹೇಳಿದನು. ಮಕ್ಕಳು, ಅವರ ಅಪ್ಪ-ಅಮ್ಮ ಎಲ್ಲರೂ ಗುಡಿಯಲ್ಲಿಯೇ ಉಳಿದರು. ಗುಡಿಯಲ್ಲಿ ಕಾಲಿಡಲೂ ಜಾಗವಿರಲಿಲ್ಲ. ಮಕ್ಕಳ ಭೇದಿಯಿಂದ ಗುಡಿಯು ಒಳ-ಹೊರಗೆ ಹೊಲಸಾಯಿತು.

ಪಾಪಣ್ಣ ತನಗೆ ತಿಳಿದ ಎಲ್ಲವನ್ನೂ ಮಾಡಿದನು.

ಸ್ನೇಹಿತನ ಊರಿಗೆ ಹೋಗಿದ್ದ ಮಧು ಬೆಳಿಗ್ಗೆ ಊರಿಗೆ ಬಂದನು. ಮಕ್ಕಳ ಭೇದಿ ವಿಷಯವನ್ನು ಯಾರೋ ಹೇಳಿದರು. ತಕ್ಷಣ ಮಧು ಗುಡಿಗೆ ಬಂದು ಮಕ್ಕಳನ್ನು ನೋಡಿದನು. ನೀರಿಗೆ ಸಕ್ಕರೆ, ಉಪ್ಪು ಕರಗಿಸಿ

ಮಕ್ಕಳಿಗೆ ಕುಡಿಸಲು ಹೇಳಿದನು. ಪಾಪಣ್ಣನಿಗೆ ಇದು ದೊಡ್ಡಸ್ತಿಕೆ ಪ್ರಶ್ನೆ ಎನಿಸಿತು. ಮಧು ಕೊಡುವ ನೀರನ್ನು ಕುಡಿಸಿದರೆ ಭೇದಿ ಇನ್ನೂ ಹೆಚ್ಚಾಗುತ್ತದೆ ಎಂದು ಮಕ್ಕಳ ತಂದೆ-ತಾಯಿಯರಿಗೆ ಹೆದರಿಸಿದನು. ಅವರು ನೀರು ಕುಡಿಸಲು ಒಪ್ಪಲಿಲ್ಲ.

"ನೀವು ಹೀಗೇ ಮಲಗಿಸಿಕೊಂಡಿದ್ದರೆ, ಸಂಜೆ ವೇಳೆಗೆ ನಿಮ್ಮ ಮಕ್ಕಳು ಉಳಿಯೋಲ್ಲ. ನನ್ನ ಮಾತು ಕೇಳಿ ಈ ನೀರನ್ನು ಕುಡಿಸುತ್ತಿರಿ. ಮಕ್ಕಳನ್ನು ಮನೆಗೆ ಕರೆದುಕೊಂಡು ಹೋಗಿ. ನಾನು ಡಾಕ್ಟರನ್ನು ಕರೆತರುತ್ತೇನೆ" ಎಂದು ಮಧು ಹೇಳಿದನು. ಪಾಪಣ್ಣನ ಬಗ್ಗೆ ಸ್ವಲ್ಪ ನಂಬಿಕೆ ಕಳೆದುಕೊಂಡಿದ್ದ ಕೆಲವರು ಮಧು ಕೊಟ್ಟ ನೀರನ್ನು ಕುಡಿಸಿದರು. ಜೊತೆಗೆ ಮಕ್ಕಳನ್ನು ಮನೆಗೆ ಕರೆದುಕೊಂಡು ಹೋದರು. ಆದರೆ ಭೀಮಣ್ಣನ ಮಗ ನಿತ್ರಾಣಗೊಂಡಿದ್ದ. ಇನ್ನೆರಡು ಮಕ್ಕಳೂ ತುಂಬಾ ನಿತ್ರಾಣಗೊಂಡಿದ್ದವು.

ಮಧು ಸಮೀಪದ ಪಟ್ಟಣದಿಂದ ಡಾಕ್ಟರನ್ನು ಕರೆ ತಂದನು. ಆ ವೇಳೆಗೆ ಇಬ್ಬರು ಮಕ್ಕಳು ತೀರಿಕೊಂಡಿದ್ದರು. ಭೀಮಣ್ಣನ ಮಗನೂ ಆಗಲೋ ಈಗಲೋ ಎನ್ನುವಂತಾಗಿದ್ದನು. ಡಾಕ್ಟರ್ ತುರ್ತು ಚಿಕಿತ್ಸೆ ನೀಡಿದರು. ಎಲ್ಲ ಮಕ್ಕಳೂ ಚೇತರಿಸಿಕೊಳ್ಳತೊಡಗಿದರು. ಆದರೆ ಭೀಮಣ್ಣನ ಮಗ ಚೇತರಿಸಿಕೊಳ್ಳಲಿಲ್ಲ. ಸಂಜೆಯ ವೇಳೆಗೆ ಅವನೂ ತೀರಿಕೊಂಡನು.

ಭೀಮಣ್ಣನಿಗೆ ಆಘಾತವಾಯಿತು. ಪಾಪಣ್ಣನ ಮೇಲೆ ರೋಷ ಉಕ್ಕಿತು. ದೊಣ್ಣೆ ಹಿಡಿದು ನೇರವಾಗಿ ಗುಡಿಗೆ ಬಂದನು. ಕೆಲವರು ಅವನ ಹಿಂದೆ ನಡೆದರು. ಒಳಗೆ ಮಲಗಿದ್ದ ಪಾಪಣ್ಣನನ್ನು ದರ ದರ ಎಳೆದು ಹೊರ ತಂದನು. ಮಾತಾಡಲು ಅವಕಾಶ ಕೊಡದೆ ಹೊಡೆಯಲು ಹೋದನು. ಜೊತೆಯಲ್ಲಿ ಬಂದವರು ಭೀಮಣ್ಣನನ್ನು ಹಿಡಿದು

ಕೊಂಡರು. ಈ ಗದ್ದಲದಿಂದಾಗಿ ಊರಿನವರೆಲ್ಲಾ ಬಂದು ಸೇರಿದರು. ಗೌಡನೂ ಬಂದನು. ಮಧು ಸಹ ಬಂದನು.

ಮಧು ಪಾಪಣ್ಣನ ವಿಷಯವನ್ನು ಜನರಿಗೆ ತಿಳಿಸಿದನು. ಪಾಪಣ್ಣನ ಬಣ್ಣ ಬಯಲಾಯಿತು. "ನನ್ನಿಂದ ತಪ್ಪಾಯಿತು. ಇನ್ನು ಮೇಲೆ ಹೀಗೆಲ್ಲಾ ಮಾಡುವುದಿಲ್ಲ" ಎಂದು ಪಾಪಣ್ಣ ಕ್ಷಮೆ ಕೇಳುವ ನಾಟಕವಾಡಿದನು. "ಬುದ್ಧಿ ಕಲಿತುಕೊಂಡು ನೆಟ್ಟಗೆ ಬದುಕುವುದನ್ನು ಕಲಿ" ಎಂದು ಗೌಡನು ಬೆದರಿಸಿದನು. ಊರಿನ ಜನರೂ ಛೀಮಾರಿ ಹಾಕಿ ಅದನ್ನೇ ಹೇಳಿದರು.

ಬೆಳಗಾಯಿತು. ಗುಡಿಯ ಬಾಗಿಲು ತೆರೆದಿರಲಿಲ್ಲ. ಊರ ಜನ ಬಂದು ನೋಡಿದರು. ಪಾಪಣ್ಣ ಗುಡಿಯಲ್ಲಿ ಇರಲಿಲ್ಲ. ಅವನ ಬಟ್ಟೆಬರೆ ಏನೂ ಇರಲಿಲ್ಲ.

ಪಾಪಣ್ಣ ಪರಾರಿಯಾಗಿದ್ದ. ಬರಿ ಕೈಯಲ್ಲಿ ಬಂದಿದ್ದ ಪಾಪಣ್ಣ ದುಡ್ಡಿನ ಗಂಟಿನ ಜೊತೆ ಬೇರೆ ಊರಿನ ಕಡೆ ನಡೆದಿದ್ದ. ಪಾಪಣ್ಣನು ನಿಮ್ಮ ಊರಿಗೂ ಬಂದಾನು, ಜೋಪಾನ!

Laser typeset at Saravu Graphic Impressions, New Delhi and printed at Shagun offset, New Delhi

ನವಸಾಕ್ಷರಸ್ಥರಿಗಾಗಿ ಈ ಪುಸ್ತಕವನ್ನು ಪ್ರಕಟಿಸಲಾಗಿದೆ. ನೀವು ನವಸಾಕ್ಷರಸ್ಥರಾಗಿದ್ದಲ್ಲಿ ಈ ಕೆಳಗಿನ ಪ್ರಶ್ನೆಗಳಿಗೆ ನಿಮ್ಮ ಉತ್ತರವನ್ನು ಬೇರೊಂದು ಹಾಳೆಯಲ್ಲಿ ಬರೆದು ಕಳುಹಿಸಿಕೊಡಿ. ಇದು ಇನ್ನೂ ಉತ್ತಮ ಪುಸ್ತಕಗಳನ್ನು ಹೊರತರುವಲ್ಲಿ ನಮಗೆ ನೆರವಾಗುತ್ತದೆ. ನಮ್ಮ ವಿಳಾಸವನ್ನು ಕೊನೆಯಲ್ಲಿ ಕೊಡಲಾಗಿದೆ.

1. ನಿಮ್ಮ ಹೆಸರು
2. ನಿಮ್ಮ ವಯಸ್ಸು
3. ನಿಮ್ಮ ಮಾತೃಭಾಷೆ
4. ನಿಮ್ಮ ವೃತ್ತಿ
5. ನಿಮ್ಮ ತಿಂಗಳ ವರಮಾನ
6. ನಿಮ್ಮ ಪೂರ್ಣ ವಿಳಾಸ
7 ಸಾಕ್ಷರತಾ ಪಠ್ಯ ಪುಸ್ತಕಗಳ ಎಷ್ಟು ಭಾಗಗಳನ್ನು ನೀವು ಓದಿದ್ದೀರಿ?
8. ಸಾಕ್ಷರತೆಯನ್ನು ನೀವು ಯಾವ ಯಾವ ಕೆಲಸದಲ್ಲಿ ಬಳಸುತ್ತಿದ್ದೀರಿ?
9. ನೀವು ದಿನಪತ್ರಿಕೆಗಳನ್ನು ಓದುತ್ತೀರಾ? (ಪ್ರತಿದಿನ ಅಥವಾ ಆಗಿಂದಾಗ್ಗೆ ಅಥವಾ ಯಾವಾಗಲಾದರೂ ಒಮ್ಮೆ ಎಂಬುದನ್ನು ತಿಳಿಸಿ)
10. ನೀವು ಪುಸ್ತಕಗಳನ್ನು ಓದುತ್ತೀರಾ? (ಪ್ರತಿದಿನ ಅಥವಾ ಆಗಿಂದಾಗ್ಗೆ ಅಥವಾ ಯಾವಾಗಲಾದರೂ ಒಮ್ಮೆ ಎಂಬುದನ್ನು ತಿಳಿಸಿ)
11. ನೀವು ಯಾವ ಯಾವ ವಿಷಯಗಳ ಬಗ್ಗೆ ಪುಸ್ತಕಗಳನ್ನು ಓದಬಯಸುತ್ತೀರಿ?
12. ಈ ಪುಸ್ತಕ ನಿಮಗೆ ಹೇಗೆ ಅನಿಸಿತು?
13. ನೀವು ಪ್ರತಿ ತಿಂಗಳು ಪುಸ್ತಕ ಕೊಳ್ಳಲು ಎಷ್ಟು ಹಣ ಖರ್ಚು ಮಾಡಬಲ್ಲಿರಿ?

ಮಾಹಿತಿಯನ್ನು ಈ ವಿಳಾಸಕ್ಕೆ ಕಳಿಸಿರಿ:
ಸಂಪಾದಕೀಯ ವಿಭಾಗ (ಕನ್ನಡ)
ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ
ಎ-5, ಗ್ರೀನ್‌ಪಾರ್ಕ್
ಹೊಸದೆಹಲಿ-110016